# ಶಾಲಾ ಶಿಕ್ಷಣದಲ್ಲಿ ಮೌಲ್ಯಗಳು

***ಅನುರಾಗ್ ಬೆಹರ್***

ಶಾಲಾ ಶಿಕ್ಷಣಕ್ಕೆ ಸಂಬಂಧಿಸಿದಂತೆ ರೂಪಿಸಲಾದ ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟು 2023 (NCF), ಒಟ್ಟು ಐದು 'ಶಿಕ್ಷಣದ ಗುರಿಗಳನ್ನು' ಒಳಗೊಂಡಿದ್ದು ಅವು ತಾರ್ಕಿಕ ಆಲೋಚನೆ ಮತ್ತು ಸ್ವತಂತ್ರ ಚಿಂತನೆ, ಆರೋಗ್ಯ ಮತ್ತು ಯೋಗಕ್ಷೇಮ, ಪ್ರಜಾಸತ್ತಾತ್ಮಕ ಮತ್ತು ಸಾಮುದಾಯಿಕ ಪಾಲ್ಗೊಳ್ಳುವಿಕೆ, ಆರ್ಥಿಕ ಭಾಗವಹಿಸುವಿಕೆ ಮತ್ತು ಸಾಂಸ್ಕೃತಿಕ ಭಾಗವಹಿಸುವಿಕೆ ಇವುಗಳನ್ನು ಒಳಗೊಂಡಿದೆ. ಪಠ್ಯಕ್ರಮವು ವಿದ್ಯಾರ್ಥಿಗಳಲ್ಲಿ ಬೆಳೆಸಬೇಕಾಗಿರುವ ಜ್ಞಾನ, ಸಾಮರ್ಥ್ಯ, ಮೌಲ್ಯಗಳು ಮತ್ತು ಮನೋಭಾವಗಳನ್ನು ಆಯ್ಕೆ ಮಾಡಿಕೊಳ್ಳಲು ಈ ಗುರಿಗಳು ಮಾರ್ಗದರ್ಶನ ನೀಡುತ್ತವೆ. ಪ್ರಸ್ತುತ ನಾವು ಈ ಮೌಲ್ಯಗಳು ಮತ್ತು ಮನೋಭಾವಗಳು ಯಾವುವು ಎಂಬುದನ್ನು ನೋಡೋಣ.

ಈ ಐದು ಗುರಿಗಳನ್ನು ಸಾಧಿಸಲು ಎಲ್ಲ ವಿದ್ಯಾರ್ಥಿಗಳಲ್ಲಿ ಅಂತರ್-ಸಂಬಂಧಿತ ಮತ್ತು ಪೂರಕವಾದ ವಿವಿಧ ಮೌಲ್ಯಗಳನ್ನು ಬೆಳೆಸುವ ಅಗತ್ಯವಿದೆ. ಪ್ರಾಯೋಗಿಕ ಉದ್ದೇಶಗಳಿಗಾಗಿ ಈ ಮೌಲ್ಯಗಳನ್ನು ಮೂರು ಗುಂಪುಗಳಾಗಿ ವಿಂಗಡಿಸಲಾಗಿದೆ. ಆದರೆ ಈ ವಿಭಜನೆಯು ಬಿಗಿ ಸ್ವರೂಪದ್ದಾಗಿರಬೇಕಾಗಿಲ್ಲ. ಇವುಗಳಲ್ಲಿ ಮೊದಲನೆಯದು, ನೈತಿಕ ಮತ್ತು ಸದಾಚಾರಕ್ಕೆ ಸಂಬಂಧಿಸಿದ ಮೌಲ್ಯಗಳು; ಇವು ಸಹಾನುಭೂತಿ ಮತ್ತು ಕಾಳಜಿ, ಸಂವೇದನೆ ಮತ್ತು ಆರೈಕೆ, ನಿಷ್ಠೆ ಮತ್ತು ಪ್ರಾಮಾಣಿಕತೆ, ಧೈರ್ಯ ಮತ್ತು ಪುಟಿದೇಳುವ ಗುಣಗಳನ್ನು ಒಳಗೊಂಡಿವೆ.

ಎರಡನೆಯದು, ಪ್ರಜಾಸತ್ತಾತ್ಮಕ ದೃಷ್ಟಿಕೋನವನ್ನು ಒಳಗೊಂಡ ಪ್ರಜಾಸತ್ತಾತ್ಮಕ ಮೌಲ್ಯಗಳು; ಸ್ವಾಯತ್ತತೆ ಮತ್ತು ಸ್ವಾತಂತ್ರ್ಯಕ್ಕೆ ಬದ್ಧತೆ; ಸಮಾನತೆ, ನ್ಯಾಯ ಮತ್ತು ನ್ಯಾಯೋಚಿತತೆ; ವೈವಿಧ್ಯತೆ, ಬಹುತ್ವ ಮತ್ತು ಒಳಗೊಳ್ಳುವಿಕೆಯನ್ನು ಅಳವಡಿಸಿಕೊಳ್ಳುವುದು; ಮಾನವೀಯತೆ ಮತ್ತು ಭ್ರಾತೃತ್ವ ಮನೋಭಾವ; ಹಾಗೂ ಸಾಮಾಜಿಕ ಜವಾಬ್ದಾರಿ ಮತ್ತು ಸೇವಾ ಮನೋಭಾವಗಳನ್ನು ಒಳಗೊಂಡಿದೆ. ಮೂರನೆಯ ಗುಂಪು, ಜ್ಞಾನ ಮತ್ತು ಸತ್ಯದ ಬಗ್ಗೆ ನಾವು ಹೊಂದಿರುವ ಮೌಲ್ಯಗಳನ್ನು- ಜ್ಞಾನ ಮೀಮಾಂಸೆ ಎಂದು ಕರೆಯುವ, ವೈಜ್ಞಾನಿಕ ಮನೋಭಾವ; ಸಾಕ್ಷ್ಯಾಧಾರಿತ ಚಿಂತನೆ; ವಿವಿಧ ಕ್ಷೇತ್ರಗಳಲ್ಲಿ ಜ್ಞಾನ ಮತ್ತು ಸತ್ಯದ ಮೂಲಗಳನ್ನು ಗುರುತಿಸುವುದು; ಮತ್ತು ಸತ್ಯದ

ಅನ್ವೇಷಣಾ ವಿಧಾನಗಳೆಡೆಗೆ ದೃಢನಿಷ್ಠೆಯನ್ನು ಹೊಂದಿರುವುದು -ಮುಂತಾದವನ್ನು ಹೊಂದಿದೆ.

ಈ ಮೌಲ್ಯಗಳ ಜೊತೆಗೆ, ವಿದ್ಯಾರ್ಥಿಗಳಲ್ಲಿ ಕೆಲವು ಮನೋಭಾವಗಳನ್ನು ಬೆಳೆಸಲು ಎನ್‌ಸಿಎಫ್ ಶಾಲಾ ಪಠ್ಯಕ್ರಮಕ್ಕೆ ಮಾರ್ಗದರ್ಶನ ನೀಡುತ್ತದೆ: ಅದರಲ್ಲಿ ಮೊದಲನೆಯದು ಧನಾತ್ಮಕ ಕಾರ್ಯನೀತಿ ಅಂಶಗಳಾದ ಪ್ರಾಮಾಣಿಕತೆ, ವಿವೇಚನೆ ಮತ್ತು ಸುಸ್ಥಿರತೆಯಿಂದ ಕೂಡಿದ ಕೆಲಸ. ಎರಡನೆಯದು ಕುತೂಹಲ ಮತ್ತು ಅಚ್ಚರಿಯು ವಿದ್ಯಾರ್ಥಿಗಳಲ್ಲಿ ಅವರ ಜೀವನದುದ್ದಕ್ಕೂ ಕಲಿಯುವ ಆಸಕ್ತಿಯನ್ನು ಉಳಿಸುತ್ತದೆ. ಇವೆಲ್ಲದರೊಂದಿಗೆ ವಿಶ್ವಪ್ರಜೆಯಾಗಿರುವ ಜೊತೆಗೆ ಭಾರತದ ಬೇರಿನೊಂದಿಗೆ ಗುರುತಿಸಿಕೊಳ್ಳುವಂತೆ ಮಾಡುವುದು.

ಒಟ್ಟಿನಲ್ಲಿ ಇದು ಶಾಲೆಗಳು ಮತ್ತು ಶಿಕ್ಷಣ ವ್ಯವಸ್ಥೆಗಳು  ಅನೇಕ ಪ್ರಮುಖ ಅಂಶಗಳೊಂದಿಗೆ ಸಾಮರಸ್ಯದಿಂದ  ಕಾರ್ಯ ನಿರ್ವಹಿಸುವ ವಿಧಾನವನ್ನು ಒಳಗೊಂಡಿದೆ.

ಪಠ್ಯವಿಷಯ, ಬೋಧನಾ ವಿಧಾನ ಮತ್ತು ಮೌಲ್ಯಮಾಪನಗಳನ್ನೊಳಗೊಂಡಂತೆ, ಶಾಲೆಯ ಎಲ್ಲ ಹಂತ ಮತ್ತು ವಿಷಯಗಳಿಗೆ ಸಂಬಂಧಿಸಿದಂತೆ, ಕಲಿಕೆಯ ಮಾನದಂಡಗಳು ಹಾಗೂ ಪ್ರಕ್ರಿಯೆಯ ಸಮಗ್ರ ಭಾಗವಾಗಿ ಮೌಲ್ಯಗಳು ಮತ್ತು ಮನೋಭಾವವನ್ನು ಬೆಳೆಸುವುದು ಅಗತ್ಯವಾಗಿದೆ. ಉದಾಹರಣೆಗೆ, ಸಾಹಿತ್ಯದ ಮೂಲಕ ಸಹಾನುಭೂತಿ ಅಥವಾ ಸಾಮಾಜಿಕ ವಿಜ್ಞಾನದ ಮೂಲಕ ಸಾಕ್ಷ್ಯಾಧಾರಿತ ಚಿಂತನೆಯನ್ನು ಬೆಳೆಸುವುದು.

ನಿಜ ಜೀವನದಲ್ಲಿ ಮೌಲ್ಯಗಳನ್ನು ವಿದ್ಯಾರ್ಥಿಗಳು ತಾವೇ ಅನುಭವಿಸಿ ಆಚರಣೆಗೆ ತಂದಾಗ ಪರಿಣಾಮಕಾರಿಯಾಗಿ ಕಲಿಯಲು ಸಾಧ್ಯವಾಗುತ್ತದೆ. ಆದ್ದರಿಂದ, ವಿದ್ಯಾರ್ಥಿಗಳಲ್ಲಿ ಬೆಳೆಸಲು ಉದ್ದೇಶಿಸಿರುವ ಮೌಲ್ಯಗಳಿಗೆ ಜೀವ ತುಂಬುವ ಶಾಲಾ ಸಂಸ್ಕೃತಿ ಮತ್ತು ಅದಕ್ಕೆ ಸಂಬಂಧಿಸಿದ ಆಚರಣೆಗಳನ್ನು ಸುಸ್ಥಿರವಾಗಿಡುವುದು  ನಿರ್ಣಾಯಕವಾಗುತ್ತದೆ. ಉದಾಹರಣೆಗೆ, ಶಾಲಾ ಆಡಳಿತವು ಪೋಷಕರನ್ನು ನಡೆಸಿಕೊಳ್ಳುವ ರೀತಿ, ಕೆಲವು ಕ್ರೀಡೆಗಳಲ್ಲಿ ಉತ್ತಮವಾಗಿ ಪಾಲ್ಗೊಳ್ಳಲು ಸಾಧ್ಯವಾಗದ ವಿದ್ಯಾರ್ಥಿಗಳೊಂದಿಗೆ ಶಿಕ್ಷಕರು ನಡೆದುಕೊಳ್ಳುವ ರೀತಿ, ಪ್ರಾಂಶುಪಾಲರು ಮತ್ತು ಇತರ ಶಿಕ್ಷಕರ ನಡುವಿನ ಸಂಬಂಧ, ಇವೆಲ್ಲವೂ ಪ್ರಜಾಪ್ರಭುತ್ವ, ನ್ಯಾಯ, ಸಮಾನತೆ, ಹಂಚಿಕೊಳ್ಳುವ ಮತ್ತು ಭ್ರಾತೃತ್ವದ ಕಲ್ಪನೆಗಳನ್ನು ಮಕ್ಕಳಲ್ಲಿ

ರೂಪಿಸುತ್ತವೆ. ಶಾಲಾ ಸಂಸ್ಕೃತಿ ಮತ್ತು ತರಗತಿಯ ಪ್ರಕ್ರಿಯೆಗಳು ಮಕ್ಕಳು ಬೆಳೆದಂತೆ ಅವರ ಮೇಲೆ ಬೀರುವ ಪರಿಣಾಮಗಳು ವಿಭಿನ್ನವಾಗಿರುವುದರಿಂದ ಅವುಗಳನ್ನು ಸೂಕ್ತವಾಗಿ ಯೋಜಿಸಬೇಕಾಗುತ್ತದೆ. ಉದಾಹರಣೆಗೆ, ಚಿಕ್ಕ ಮಕ್ಕಳಿಗೆ ಅನುಸರಿಸಲು ಮಾದರಿ ನಡವಳಿಕೆ ಅಗತ್ಯವಿದ್ದರೆ, ದೊಡ್ಡ ಮಕ್ಕಳು ಯಾವುದೇ ವಿಷಯಕ್ಕೆ ಸಂಬಂಧಿಸಿದ ಕಾರಣಗಳನ್ನು ಆಲೋಚಿಸುತ್ತಾ ಹೋಗುತ್ತಾರೆ.

ಪಠ್ಯಕ್ರಮವು, ಈ ಪ್ರತಿಯೊಂದು ಪ್ರಕ್ರಿಯೆ ಮತ್ತು ವಿಷಯಗಳು ವಿಭಿನ್ನ ಮೌಲ್ಯಗಳ ಮೇಲೆ ಬೇರೆ ಬೇರೆ ರೀತಿಯ ಪರಿಣಾಮಕ್ಕೆ ಕಾರಣವಾಗುವುದನ್ನು ಪರಿಗಣಿಸಬೇಕಾಗುತ್ತದೆ. ಉದಾಹರಣೆಗೆ, ತರಗತಿಯಲ್ಲಿ ನಡೆಸಲಾಗುವ ನಿರಂತರ ಸಂವಾದ ಮತ್ತು ಚರ್ಚೆಯು ಪ್ರಜಾಸತ್ತಾತ್ಮಕ, ತಾರ್ಕಿಕ ಚಿಂತನೆ ಮತ್ತು ಸಂವೇದನೆಯನ್ನು ವಿದ್ಯಾರ್ಥಿಗಳಲ್ಲಿ ಅಭಿವೃದ್ಧಿಪಡಿಸುತ್ತದೆ. ಹಾಗೆಯೇ ಕ್ರೀಡೆಗಳು ಸಹನೆ, ಪ್ರಾಮಾಣಿಕತೆ ಮತ್ತು ಧೈರ್ಯ ಮುಂತಾದ ಸದ್ಗುಣಗಳನ್ನು ಬೆಳೆಸಿದರೆ ಸಮಾಜ ವಿಜ್ಞಾನ, ವಿಜ್ಞಾನ ಮತ್ತು ಗಣಿತವು ಜ್ಞಾನಕ್ಕೆ ಸಂಬಂಧಿಸಿದ ಮೌಲ್ಯಗಳನ್ನು ಬೆಳೆಸುವಲ್ಲಿ ಮಹತ್ತರ ಪಾತ್ರ ವಹಿಸುತ್ತವೆ.

ವಿಷಯವಸ್ತು ಎಂದರೆ ಅಧ್ಯಯನ ಸಾಮಗ್ರಿಯು, ಮೌಲ್ಯಗಳ ಮೇಲೆ ಸೂಚ್ಯವಾಗಿ ಮತ್ತು ಸ್ಪಷ್ಟವಾಗಿ ಪ್ರಭಾವ ಬೀರುತ್ತದೆ. ಬಹುತ್ವ, ಸಮಾನತೆ ಮತ್ತು ನ್ಯಾಯವನ್ನು ಎತ್ತಿ ಹಿಡಿಯುವ ಹಾಗೂ ಅವುಗಳನ್ನು ಸಂಭ್ರಮಿಸುವ ಐತಿಹಾಸಿಕ ಘಟನೆಗಳು ಮತ್ತು ಕಥೆಗಳು ಈ ಮೌಲ್ಯಗಳನ್ನು ಬೆಳೆಸುತ್ತವೆ. ಈ ಮೌಲ್ಯಗಳು ವಿಷಯಗಳ ಆಯ್ಕೆಯಲ್ಲಿ ಸ್ಪಷ್ಟವಾಗಿ ಪರಿಗಣಿಸಲ್ಪಟ್ಟಿವೆ. ಉದಾಹರಣೆಗೆ, ಜನರ ಹೆಸರುಗಳು, ಭೂಪ್ರದೇಶದಲ್ಲಿನ ವೈವಿಧ್ಯತೆ, ಪುಸ್ತಕದಲ್ಲಿ ಒಳಗೊಳ್ಳುವ ಚಿತ್ರ ಮತ್ತು ದೃಷ್ಟಾಂತಗಳು. ಭಾರತೀಯ ಸಂವಿಧಾನ, ಅದರಲ್ಲೂ ಸಮಾನತೆ, ಸ್ವಾತಂತ್ರ್ಯ ಮತ್ತು ಭ್ರಾತೃತ್ವ ಹಾಗೂ ಮೂಲಭೂತ ಕರ್ತವ್ಯಗಳಿಗೆ ಸಂಬಂಧಿಸಿದ ಮೌಲ್ಯಗಳನ್ನು ಕುರಿತ ಚರ್ಚೆಗಳು ತರಗತಿ ಪ್ರಕ್ರಿಯೆಗಳ ಭಾಗವಾಗಿರಬೇಕು.

ಒಂಬತ್ತನೇ ತರಗತಿಯ ಎಲ್ಲ ವಿದ್ಯಾರ್ಥಿಗಳಿಗೆ 'ಸದಾಚಾರ ಮತ್ತು ನೈತಿಕ ತಾರ್ಕಿಕತೆ'ಯ ಘಟಕವನ್ನು ಪರಿಚಯಿಸಲಾಗಿದೆ. ಹಾಗೆಯೇ ಶಾಲೆಗಳು ಕೂಡ ಯಾವ ನಿರ್ದಿಷ್ಟ ಮೌಲ್ಯಗಳನ್ನು ವಿದ್ಯಾರ್ಥಿಗಳೊಂದಿಗೆ ನೇರವಾಗಿ ಚರ್ಚಿಸಬೇಕು ಎಂಬುದನ್ನು ನಿರ್ಧರಿಸಬೇಕಾಗುತ್ತದೆ. ಉದಾಹರಣೆಗೆ, ಸಮಾಜ ವಿಜ್ಞಾನದ ಕೆಲವು ತರಗತಿಗಳಲ್ಲಿ ಸಹಾನುಭೂತಿಯನ್ನು ಗಮನದಲ್ಲಿಟ್ಟುಕೊಂಡು ಹಕ್ಕು ಮತ್ತು ಕರ್ತವ್ಯಗಳು ಒಂದಕ್ಕೊಂದು ಹೇಗೆ ಪೂರಕ ಎಂಬುದರ ಕುರಿತು ಗಮನಹರಿಸಬಹುದು. ಈ ರೀತಿಯ ವಿಷಯಗಳನ್ನು

ಕಲಿಸಲು ಶಿಕ್ಷಕರಿಗೆ ತರಬೇತಿಯ ಅಗತ್ಯವಿರುತ್ತದೆ ಮತ್ತು ಅಂಥ ವಿಷಯಗಳನ್ನು ಕಲಿಸಲು ನೀರಸವಲ್ಲದ, ಆಸಕ್ತಿಕರ ಬೋಧನಾ-ಕಲಿಕೆ ಸಾಮಗ್ರಿಗಳ ಅಗತ್ಯವಿದ್ದು ಅವುಗಳನ್ನು ಅಭಿವೃದ್ಧಿಪಡಿಸಬೇಕಾಗಿದೆ.

ಮೌಲ್ಯಗಳಲ್ಲಿ ಘರ್ಷಣೆಯಿರುವುದು ವಾಸ್ತವ ಮತ್ತು ಈ ಕುರಿತು ಎನ್‌ಸಿಎಫ್ ನೇರವಾಗಿ ಗಮನಹರಿಸುತ್ತದೆ. ಪಠ್ಯಕ್ರಮದ ಭಾಗವಾಗಿ ಶಾಲೆಯಲ್ಲಿ ಪ್ರೋತ್ಸಾಹಿಸಲಾಗುವ ಮೌಲ್ಯಗಳು ಹೊರಗೆ ಆಚರಣೆಯಲ್ಲಿ ಇರಲಾರದು ಹಾಗೂ ಇವುಗಳಿಗೆ ತಡೆಯೊಡ್ಡುವ ಪ್ರಯತ್ನಗಳು ನಡೆಯಬಹುದು. ಉದಾಹರಣೆಗೆ, ಸಮಾನತೆಯು ಶಾಲೆಯಲ್ಲಿ ಅನುಸರಿಸುವ ಪ್ರಮುಖ ಮೌಲ್ಯಗಳಲ್ಲಿ ಒಂದಾಗಿದೆ. ಆದರೆ ಸಮುದಾಯಗಳಲ್ಲಿ ಲಿಂಗ, ಜಾತಿ, ಅಥವಾ ಇತರ ವಿಚಾರಗಳಲ್ಲಿ ತಾರತಮ್ಯ ಮೂಡಬಹುದು. ಯಾವುದಕ್ಕೂ ಸರಳ ಪರಿಹಾರಗಳು ಇಲ್ಲದಿರುವುದರಿಂದ ಎನ್‌ಸಿಎಫ್ ಅಂತಹ ಪರಿಹಾರಗಳನ್ನು ಸೂಚಿಸುವುದಿಲ್ಲ. ಅದರ ಬದಲು ಮಾನವ ಸಮಾಜದಲ್ಲಿ ಅಂತಹ ಘರ್ಷಣೆಯನ್ನು ಎದುರಿಸುವುದು ಅನಿವಾರ್ಯವಾದ ಕಾರಣ, ಪರಸ್ಪರ ಮಾತುಕತೆಯ ಮೂಲಕ ಮತ್ತು ಸಹಾನುಭೂತಿಯ ನಡವಳಿಕೆಯ ಮಾರ್ಗವನ್ನು ಸೂಚಿಸುತ್ತದೆ. ಪಠ್ಯಕ್ರಮದ ಉದ್ದೇಶಿತ ಗುರಿಗಳನ್ನು ಸಾಧಿಸುವ ದಿಸೆಯಲ್ಲಿ ಈ ಪ್ರಕ್ರಿಯೆಗಳು ವಿವೇಚನಾಪೂರ್ವಕವಾಗಿಯೂ ಕ್ರಮಬದ್ಧವಾಗಿಯೂ ಇರಬೇಕಾಗುತ್ತದೆ.

ವಿದ್ಯಾರ್ಥಿಗಳಲ್ಲಿ ಮೌಲ್ಯಗಳು ಮತ್ತು ಸ್ವಭಾವಗಳನ್ನು ಬೆಳೆಸುವ ಜವಾಬ್ದಾರಿ ಶಾಲೆ ಮತ್ತು ಸಮುದಾಯಗಳ ಮೇಲಿದೆ. ಆದರೂ ಪ್ರತಿಯೊಬ್ಬ ವಿದ್ಯಾರ್ಥಿಯ ವೈಯಕ್ತಿಕ ನೆಲೆಯಲ್ಲಿ ಮೌಲ್ಯಗಳು ಅಂತರ್ಗತವಾಗಿರುವುದನ್ನು ಮೌಲ್ಯಮಾಪನ ಮಾಡಬೇಕಾಗುತ್ತದೆ. ವಿದ್ಯಾರ್ಥಿಗಳ ನಡವಳಿಕೆಯ ಕುರಿತು ಯಾವುದೇ ರೀತಿಯ ಪೂರ್ವಗ್ರಹವಿಲ್ಲದೆ ಅವರು ಸೂಕ್ತವಾದ ರಚನಾತ್ಮಕ ಕ್ರಿಯೆಯಲ್ಲಿ ತೊಡಗುವಂತೆ ಪ್ರೇರೇಪಿಸಿ ಅವರ ನಡವಳಿಕೆಯನ್ನು ಗಮನಿಸುತ್ತಲೇ ಈ ಮೌಲ್ಯಮಾಪನವನ್ನು ಕೈಗೊಳ್ಳಬೇಕು. ಉದಾಹರಣೆಗೆ, ವಿದ್ಯಾರ್ಥಿಯು 'ಸಹಾನೂಭೂತಿ' ಅಥವಾ 'ಸಂವೇದನೆಯನ್ನು' ಬೆಳೆಸಿಕೊಂಡಿದ್ದಾನೆ ಎಂದು ಹೇಳುವುದಕ್ಕಿಂತ 'ಅವನು ಇತರ ವಿದ್ಯಾರ್ಥಿಗಳಿಗೆ ಸಹಾಯ ಮಾಡುತ್ತಾನೆ' ಎನ್ನುವುದು ಶೈಕ್ಷಣಿಕವಾಗಿ ಹೆಚ್ಚು ಸೂಕ್ತವಾಗಿರುತ್ತದೆ.

ಶಿಕ್ಷಕರು, ಪ್ರಾಂಶುಪಾಲರು ಮತ್ತು ಶಿಕ್ಷಣ ವ್ಯವಸ್ಥೆಯ ಮೌಲ್ಯಗಳು ವಿದ್ಯಾರ್ಥಿಗಳ ಮೇಲೆ ಮೂಲಭೂತ ಪರಿಣಾಮವನ್ನು ಬೀರುತ್ತವೆ. ಹೀಗಾಗಿ, ಶಿಕ್ಷಣ ವ್ಯವಸ್ಥೆಯ ಒಟ್ಟಾರೆ ಸಂಸ್ಕೃತಿಯು ವಿದ್ಯಾರ್ಥಿಗಳಿಂದ ನಿರೀಕ್ಷಿಸುವ ಮೌಲ್ಯಗಳು ಮತ್ತು ಮನೋಭಾವಗಳ ಬೆಳವಣಿಗೆಗೆ ಬೆಂಬಲ ನೀಡಬೇಕು. ಮುಖ್ಯವಾಗಿ, ಶಿಕ್ಷಣದಲ್ಲಿ ವ್ಯಕ್ತಿಯೊಬ್ಬನ ವೈಯಕ್ತಿಕ ನಂಬಿಕೆಗಳ ಹೊರತಾಗಿಯೂ, ಶಿಕ್ಷಣವು ಬೆಳೆಸಲು ಬಯಸುವ ಮೌಲ್ಯಗಳು ಎಲ್ಲರ ನಡವಳಿಕೆಯಲ್ಲಿಯೂ ವ್ಯಕ್ತವಾಗುವಂತಿರಬೇಕು.

ಪ್ರಾರಂಭದಲ್ಲಿಯೇ ಶಿಕ್ಷಣ ವ್ಯವಸ್ಥೆಗೆ ಮೌಲ್ಯಗಳನ್ನು ಅಭಿವೃದ್ಧಿಪಡಿಸುವುದು ದೊಡ್ಡ ಸವಾಲು ಎಂಬುದನ್ನು ಎನ್‌ಸಿಎಫ್ ಸ್ಪಷ್ಟವಾಗಿ ಒಪ್ಪಿಕೊಳ್ಳುತ್ತದೆ. ಆದ್ದರಿಂದ ನಾವು ನಮ್ಮ ಗರಿಷ್ಠ ಪ್ರಯತ್ನವನ್ನು ಮಾಡಲೇಬೇಕಾಗಿದೆ. ಏಕೆಂದರೆ ಉತ್ತಮ ಮೌಲ್ಯಗಳಿಲ್ಲದ ಶಿಕ್ಷಣದಿಂದ ಏನು ಪ್ರಯೋಜನ?